2. ಇವರ ಗುತ್ತಿಗೆ ನೇಮಕಾತಿಗೆ ಮಾಸಿಕ ರೂ. 4050/– (ನಾಲ್ಕು ಸಾವಿರದ ಐವತ್ತು ರೂಪಾಯಿಗಳು ಮಾತ್ರ) ಗಳ ಸಂಚಿತ ವೇತನವನ್ನು ನಿಗದಿಪಡಿಸಲಾಗಿದೆ. ಇದಲ್ಲದೆ, ಇನ್ನಿತರ ಯಾವುದೇ ಭತ್ಯೆಗಳಿಗೂ ಇವರು ಅರ್ಹರಾಗಿರುವುದಿಲ್ಲ.
3. ಸದರಿ ಗುತ್ತಿಗೆ ನೌಕರನು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಟ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆಯನ್ನು ಮಾತ್ರ ಪಡೆಯಲು ಅರ್ಹರಾಗಿರುತ್ತಾರೆ.
5. ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ವೈದ್ಯಕೀಯ ಕಾರಣಗಳ ಮೇರೆಗಾಗಲೀ ಅಥವಾ ಬೇರೆ ಕಾರಣಗಳಿಂದಾಗಲೀ ಅನಧಿಕೃತ ಗೈರು ಹಾಜರಿಯಾದಲ್ಲಿ ಗುತ್ತಿಗೆ ಆಧಾರದ ನೇಮಕಾತಿಯು ತಾನಾಗಿಯೇ ರದ್ದಾಗುತ್ತದೆ.
6. ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆದು, ವೈದ್ಯಕೀಯ ಕಾರಣಗಳ ಮೇರೆಗೆ ಅಥವಾ ಸಮರ್ಥನೀಯ ಕಾರಣಗಳ ಮೇರೆಗೆ ಗುತ್ತಿಗೆ ಆಧಾರದ ಅವಧಿಯಲ್ಲಿ ಮೂರು ತಿಂಗಳಿಗೆ ಮೀರದಂತೆ, ಗೈರು ಹಾಜರಾದಲ್ಲಿ ಆ ಕಾರಣದಿಂದ ಗುತ್ತಿಗೆ ನೇಮಕಾತಿ ರದ್ದಾಗುವುದಿಲ್ಲ. ಆದರೆ ಈ ಅವಧಿಯನ್ನು ಕರ್ತವ್ಯ ರಹಿತ ದಿನಗಳೆಂದು (ಡೈಸ್–ನಾನ್) ಪರಿಗಣಿಸಲಾಗುವುದು ಮತ್ತು ಅವರು ಈ ಅವಧಿಗೆ ಯಾವುದೇ ವೇತನ ಮತ್ತು ಇತರೆ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.
7. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಿಗೆ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ, ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
8. ಸದರಿ ನೌಕರರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
9. ಸದರಿ ಗುತ್ತಿಗೆ ನೇಮಕಾತಿಯನ್ನು ಯಾವುದೇ ಕಾರಣಕ್ಕೂ ಖಾಯಂ ಎಂದು ಪರಿಗಣಿಸುವುದಿಲ್ಲ.
10. ಅವರ ಕರ್ತವ್ಯ ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಗಳಿಂದ ನೆರವೇರಿಸುವುದು.
11. ಅವರ ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
12. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
13. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
14. ಅವರ ದುರ್ನಡತೆಯಿಂದಾಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬುಕೊಡಲು ಹೊಣೆಯಾಗಿರುತ್ತಾರೆ.
15. ಆ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ವಿಷಯ :** 1930ರಲ್ಲಿ ಮೈಸೂರು ಸರ್ಕಾರವು ಪ್ರಕಟಿಸಿದ್ದ ಶ್ರೀ ಸಿ. ಹಯವದನರಾವ್ ರವರು ಸಂಪಾದಿಸಿದ್ದ ಮೈಸೂರು ಗ್ಯಾಸೆಟಿಯರ್‌ನ ಏಳು ಸಂಪುಟಗಳ ಸ್ಕ್ಯಾನಿಂಗ್ ಮತ್ತು ಪುನರ್ ಮುದ್ರಣ ಮಾಡಲು ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಗ್ಯಾಇ:ಮೈ:ಗ್ಯಾ:ಪು:ಮು:08–09, ದಿನಾಂಕ 11–6–2008.

2. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 33 ಸ್ವೀಮರ 2008, ದಿನಾಂಕ 14–5–2008.

**ಪ್ರಸ್ತಾವನೆ :**

ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ರವರು ಮೇಲೆ (1)ರಲ್ಲಿ ಓದಲಾದ ದಿನಾಂಕ 11–6–2008ರ ಪತ್ರದಲ್ಲಿ 2008–09ನೇ ಸಾಲಿನಲ್ಲಿ 1930ರಲ್ಲಿ ಮೈಸೂರು ಸರ್ಕಾರವು ಪ್ರಕಟಿಸಿದ್ದ ಶ್ರೀ ಸಿ. ಹಯವದನರಾವ್ ರವರು ಸಂಪಾದಿಸಿದ್ದ ಮೈಸೂರು ಗ್ಯಾಸೆಟಿಯರ್‌ನ ಏಳು ಸಂಪುಟಗಳ ಸ್ಕ್ಯಾನಿಂಗ್ ಮತ್ತು ಪುನರ್ ಮುದ್ರಣ ಮಾಡಲು ಉದ್ದೇಶಿಸಿದ್ದು ಇದಕ್ಕೆ ತಗಲುವ ವೆಚ್ಚವನ್ನು ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮುಂದುವರಿದ ಯೋಜನೆ ಅಡಿಯಲ್ಲಿ ರೂ. 13.00 ಲಕ್ಷಗಳಿಗೆ ಅವಕಾಶ ಕಲ್ಪಿಸಕೊಳ್ಳಲಾಗಿದೆ ಎಂದು ತಿಳಿಸಿ ಹಣ ಮಂಜೂರಾತಿ ಮಾಡಲು ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 21 ಕರಾಗೆ 2008, ಬೆಂಗಳೂರು, ದಿನಾಂಕ: 25ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 1930ರಲ್ಲಿ ಮೈಸೂರು ಸರ್ಕಾರವು ಪ್ರಕಟಿಸಿದ್ದ ಶ್ರೀ ಸಿ. ಹಯವದನರಾವ್ ರವರು ಸಂಪಾದಿಸಿದ್ದ ಮೈಸೂರು ಗ್ಯಾಸೆಟಿಯರ್‌ನ ಏಳು ಸಂಪುಟಗಳ ಸ್ಕ್ಯಾನಿಂಗ್ ಮತ್ತು ಪುನರ್ ಮುದ್ರಣ ಮಾಡಲು ರೂ. 13.00 ಲಕ್ಷಗಳನ್ನು (ರೂಪಾಯಿ ಹದಿಮೂರು ಲಕ್ಷಗಳು ಮಾತ್ರ) ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಮಂಜೂರು ಮಾಡಿದೆ:

1. ಬಿಡುಗಡೆ ಮಾಡಲಾದ ಹಣವನ್ನು ಉದ್ದೇಶಿತ ಕಾರ್ಯಕ್ರಮಕ್ಕೆ ಮಾತ್ರ ಬಳಸತಕ್ಕದ್ದು.
2. ಹಣ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 3454–08–110–0–01–59 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ವಿಷಯ :** ಶ್ರೀಮತಿ ಶ್ರೀವಿದ್ಯಾ, ಬೆಂಗಳೂರು ಇವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಆಪ್ತಶಾಖೆಯಲ್ಲಿನ ಶೀಘ್ರಲಿಪಿಗಾರರ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಿಸುವ ಬಗ್ಗೆ.

**ಓದಲಾಗಿದೆ:** ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರ ಟಿಪ್ಪಣಿ ಸಂಖ್ಯೆ: ಕಅಪ್ರಾ/ಅ/11/08–09, ದಿನಾಂಕ 19–6–2008.

**ಪ್ರಸ್ತಾವನೆ :**

ಮೇಲೆ ಓದಲಾದ ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ರವರ ದಿನಾಂಕ 19–6–2008ರ ಟಿಪ್ಪಣಿಯಲ್ಲಿ ಅವರ ಆಪ್ತಶಾಖೆಯಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಗೆ ಶ್ರೀಮತಿ ಶ್ರೀವಿದ್ಯಾ, ನಂ. 742, ಹೋಯ್ಸಳ, ಜ್ಞಾನಭಾರತಿ, 2ನೇ ಬ್ಲಾಕ್, ಬಿ.ಡಿ.ಎ. ಬಡಾವಣೆ, ಮರಿಯಪ್ಪನಪಾಳ್ಯ, ಬೆಂಗಳೂರು–56 ಇವರನ್ನು ನೇಮಕ ಮಾಡುವಂತೆ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 24 ಕೆಓಎಲ್ 2008, ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್ 2008.**

ಶ್ರೀಮತಿ ಶ್ರೀವಿದ್ಯಾ, ನಂ. 742, ಹೋಯ್ಸಳ, ಜ್ಞಾನಭಾರತಿ, 2ನೇ ಬ್ಲಾಕ್, ಬಿ.ಡಿ.ಎ. ಬಡಾವಣೆ, ಮರಿಯಪ್ಪನಪಾಳ್ಯ, ಬೆಂಗಳೂರು–56, ಇವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಆಪ್ತಶಾಖೆಯಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಗೆ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15(1)(ಬಿ)(ii)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಪ್ರಸ್ತುತ ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರ ಪದಾವಧಿಯವರೆಗೆ ಗುತ್ತಿಗೆ ಆಧಾರದ ಮೇಲೆ ಸರ್ಕಾರವು ನೇಮಕ ಮಾಡಿದೆ.

ಈ ನೇಮಕಾತಿ ಸಂಬಂಧದ ಷರತ್ತು ಮತ್ತು ನಿಬಂಧನೆಗಳನ್ನು ನಂತರ ಹೊರಡಿಸಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1369 ವೆಚ್ಚ–5/2008, ದಿನಾಂಕ 21–8–2008ರಲ್ಲಿ ಸಹಮತಿ ಪಡೆದ ನಂತರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1363

**ಎಂ.ಕೆ. ಭರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT**

**Sub :** Approval of the Project proposal of M/s Cornerstone Shelters Pvt. Ltd., to establish ‘Infotech/Hardware/Bio-Tech Park’ with common facilities, at different Survey Nos. of Mojemachappana Hosahalli village, Chikkajala Hobli, Devanahalli Taluk, Bangalore Rural Dist.

**Read :** Proceedings of the 15th State High Level Clearance Committee (SHLCC) meeting held on 21-8-2008.

**Preamble:**

1) M/s Cornerstone Shelters Pvt. Ltd is Private Limited Company, incorporated under Indian Companies Act, 1956, on 13th March 2007 in Bangalore.

The present proposal of the company is to set up a “Infotech/Hardware/Bio-Tech Park with Common Facilities” in Mojemachappna Hosahalli Village, Chikka-jala Hobli, Devanahalli Taluk, Bangalore Rural District with an investment of Rs. 1600 crores and employment to about 20000 persons.

The proposal was cleared in the 10th SHLCC Meeting held on 28-8-2007. Subsequently SHLCC in its 13th Meeting held on 13-3-2008 reviewed the proposal regarding land acquisition for the proposed project.

In the 15th SHLCC Meeting held on 21-8-2008 the proposal was discussed in detail and it was pointed out that there was lot of development taking place near the International Airport. The Urban Development Department has been requested to finalize the zoning regulation keeping in mind various aspects such as cost of land, availability of land and scope for optimum development. The Company was advised to approach BIAAPA for obtaining necessary approvals for change of land use under Town and Country planning Act, 1961.

Government has examined the recommendations of the SHLCC. Hence the following order:

**Government Order No. ITD 66 MDA 2008, Bangalore, Dated 30th October 2008**

In the circumstances explained in the Preamble, Government are pleased to accord approval to M/s. Cornerstone Shelters Pvt. Ltd., to establish Infotech/Hardware/Bio-Tech Park with common facilities”,

with an investment of Rs. 1600 Crores, in 200 acres of land at different survey nos. (as per the annexure enclosed) of Mojemachappna Hosahalli Village, Chikkajala Hobli, Devanahalli Taluk, Bangalore Rural District, subject to approval from Urban Development Department/BIAAPA with the following facilities and incentives.

**INFRASTRUCTURE FACILITIES:**

**LAND:** The Committee resolved to permit the company to establish the facilities in 200 acres of land at different survey nos. (as per the annexure enclosed) of Mojemachappna Hosahalli Village, Chikkajala Hobli, Devanahalli Taluk, Bangalore Rural Dist. KIADB to acquire and allot 200 acres of land as SUC on consent of land owners for the project. Urban Development Department/BIAPPA to further process the request of the company and accord necessary approvals after following the procedure prescribed under Town and Country Planning Act 1961 as per the proceedings read above.

**POWER:** 8 MW power to be serviced by BESCOM.

**WATER:** 3.5 MLD to be arranged on own sources. The company shall adopt rain water harvesting and water recycling.

**Pollution Control Board Clearance:** The promoters to obtain consent for establishment from KSPCB to establish the facility.

**Environment Clearance:** The promoters to obtain environmental clearance from MOEF, GOI. No work shall commence without prior EC as per prevailing law.

**Incentives & Concessions:** As per Millennium IT & Biotech Policy.

**Employment:** The company shall prepare a plan for development of human resource required for the project, train local people and provide employment to these trained local youth and comply with Government policy of employment to local people. A copy of human resource development plan shall be sent to the Director of IT & Biotechnology for monitoring.

**Vendor Development:** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Director of IT & Biotechnology for monitoring.

**Social Infrastructure Development:** The company is advised to take up social infrastructure development projects in the vicinity of proposed location of the unit. A copy of such projects shall be sent to the Director of IT & Biotechnoloy for monitoring.

**Others:**

The Promoter shall submit milestones/progress in implementation of the project regularly, which will be monitored by the Departments concerned.

By order and in the name of the Governor of Karnataka,

**M.V. KRISHNAMURTHY**

Under Secretary to Government,

Information Technology, Biotechnology and Science & Technology Department.

**Annexure to Government Order No. ITD 66 MDA 2008, Bangalore (1), Dated 30-10-2008**

**List of Sy.No's Proposed for Cornerstone Shelters Pvt. Ltd., at Mojemachappana Hosahalli village, Chikkajala Hobli, Devanahalli Taluk, Bangalore Rural District.**

| Sl.No. | Sy.No. | Extent | | Village |
|---|---|---|---|---|
| | | Acre | Guntas | |
| 1 | 89/P9 | 4 | 0 | M. Hosahalli |

| Sl.No. | Sy.No. | Extent | | Village |
|---|---|---|---|---|
| | | 2 | 30 | |
| | | 1 | 13 | |
| | | 3 | 20 | |
| 2 | 98 | 2 | 4 | M. Hosahalli |
| 3 | 98/P1 | 4 | 15 | M. Hosahalli |
| 4 | 98/P2 | 2 | 0 | M. Hosahalli |
| 5 | 98/P3 | 4 | 0 | M. Hosahalli |
| 6 | 98/P4 | 2 | 0 | M. Hosahalli |
| 7 | 98/P5 | 8 | 0 | M. Hosahalli |
| 8 | 98/P6 | 4 | 0 | M. Hosahalli |
| 9 | 98/P8 | 4 | 0 | M. Hosahalli |
| 10 | 98/P10 | 4 | 0 | M. Hosahalli |
| 11 | 98/P11 | 4 | 0 | M. Hosahalli |
| 12 | 98/P12 | 4 | 0 | M. Hosahalli |
| 13 | 98/P13 | 4 | 0 | M. Hosahalli |
| 14 | 98/P14 | 4 | 0 | M. Hosahalli |
| 15 | 98/P15 | 4 | 0 | M. Hosahalli |
| 16 | 98/P16 | 4 | 0 | M. Hosahalli |
| 17 | 98/P17 | 4 | 0 | M. Hosahalli |
| 18 | 98/P18 | 4 | 0 | M. Hosahalli |
| 19 | 98/P20 | 4 | 0 | M. Hosahalli |
| 20 | 98/P22 | 4 | 0 | M. Hosahalli |
| 21 | 98/P23 | 4 | 0 | M. Hosahalli |
| 22 | 98/P24 | 10 | 0 | M. Hosahalli |
| 23 | 98/P25-P1 | 4 | 0 | M. Hosahalli |
| 24 | 98/P25-P2 | 4 | 0 | M. Hosahalli |
| 25 | 98/P26 | 2 | 20 | M. Hosahalli |
| 26 | 98/P27 | 2 | 0 | M. Hosahalli |
| 27 | 98/P28 | 1 | 20 | M. Hosahalli |
| 28 | 98/P29 | 4 | 0 | M. Hosahalli |
| 29 | 98/P30 | 4 | 0 | M. Hosahalli |
| 30 | 98/P31 | 1 | 0 | M. Hosahalli |
| 31 | 98/P32 | 4 | 0 | M. Hosahalli |
| 32 | 98/P33 | 1 | 20 | M. Hosahalli |
| 33 | 98/P34 | 7 | 20 | M. Hosahalli |
| 34 | 98/P35 | 4 | 0 | M. Hosahalli |
| 35 | 98/P37 | 4 | 0 | M. Hosahalli |
| 36 | 98/P38 | 4 | 0 | M. Hosahalli |
| 37 | 98/P39 | 4 | 0 | M. Hosahalli |
| 38 | 98/40 | 4 | 0 | M. Hosahalli |
| 39 | 98/P43 | 4 | 0 | M. Hosahalli |

| Sl.No. | Sy.No. | Extent | | Village |
|---|---|---|---|---|
| 40 | 98/P44 | 4 | 0 | M. Hosahalli |
| 41 | 98/P45 | 1 | 0 | M. Hosahalli |
| 42 | 98/P46 | 1 | 0 | M. Hosahalli |
| 43 | 98/P47 | 1 | 0 | M. Hosahalli |
| 44 | 98/P48 | 2 | 0 | M. Hosahalli |
| 45 | 98/P49 | 4 | 0 | M. Hosahalli |
| 46 | 98/P50 | 4 | 0 | M. Hosahalli |
| 47 | 151 | 4 | 0 | M. Hosahalli |
| 48 | 159 | 4 | 6 | M. Hosahalli |
| 49 | 160 | 4 | 11 | M. Hosahalli |
| 50 | 176 | 2 | 20 | M. Hosahalli |
| 51 | 179 | 10 | 0 | M. Hosahalli |
| 52 | 180 | 4 | 0 | M. Hosahalli |
| 53 | 181 | 4 | 0 | M. Hosahalli |
| 54 | 182 | 10 | 0 | M. Hosahalli |
| 55 | 183 | 3 | 37 | M. Hosahalli |
| 56 | 184 | 4 | 0 | M. Hosahalli |
| **Total** | | **217** | **36** | |

PR. 1506

**M.V. KRISHNAMURTHY**
Under Secretary to Government,
Information Technology, Biotechnology and Science
& Technology Department.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ವತಿಯಿಂದ 2008–09ನೇ ಸಾಲಿನಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ಪುರಾತತ್ವ ವಿಚಾರಸಂಕಿರಣ, ವಸ್ತು ಪ್ರದರ್ಶನ, ಪರಂಪರೆ ಉಳಿಸಿ ಸಪ್ತಾಹಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 33 ಸ್ವೀಮರ 2008 ದಿನಾಂಕ 14–5–2008.
2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ರವರ ಪತ್ರ ಸಂಖ್ಯೆ: ಡಿಎಎಂ:ಎಸಿಟಿ:1:24:2008–09, ದಿನಾಂಕ 17–6–2008.

**ಪ್ರಸ್ತಾವನೆ :**

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ರವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಇಲಾಖೆಯು 2008–09ನೇ ಸಾಲಿನ ಕ್ರಿಯಾ ಯೋಜನೆಗೆ ಸರ್ಕಾರವು ಅನುಮೋದನೆ ನೀಡಿದೆ ಎಂದು ಅದರಲ್ಲಿ ಅನುಮೋದನೆಗೊಂಡಿರುವ ಕಾರ್ಯಕ್ರಮಗಳಾದ ಪುರಾತತ್ವ ವಿಚಾರಸಂಕಿರಣ, ವಸ್ತು ಪ್ರದರ್ಶನ, ಪರಂಪರೆ ಉಳಿಸಿ ಸಪ್ತಾಹ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ರೂ. 10.50 ಲಕ್ಷ ಅನುದಾನವನ್ನು ಮಂಜೂರು ಮಾಡುವಂತೆ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 154 ಕೆಎಂಯು 2008, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ವತಿಯಿಂದ 2008–09ನೇ ಸಾಲಿನಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ಕಾರ್ಯಕ್ರಮಗಳಾದ ಪುರಾತತ್ವ ವಿಚಾರಸಂಕಿರಣ, ವಸ್ತು

ಪ್ರದರ್ಶನ, ಪರಂಪರೆ ಉಳಿಸಿ ಸಪ್ತಾಹ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಕೆಳಕಂಡ ಪಟ್ಟಿಯಲ್ಲಿ ವಿವರಿಸಿರುವಂತೆ ಕಾರ್ಯಕ್ರಮವಾರು ಹಣ ಒಟ್ಟಾರೆ ರೂ. 10.50 ಲಕ್ಷಗಳನ್ನು (ರೂಪಾಯಿ ಹತ್ತು ಲಕ್ಷದ ಐವತ್ತು ಸಾವಿರಗಳು ಮಾತ್ರ) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಅರಮನೆ ಆವರಣ, ಮೈಸೂರು ರವರಿಗೆ ಈ ಮೂಲಕ ಮಂಜೂರು ಮಾಡಿದೆ.

| ಕ್ರಮ ಸಂಖ್ಯೆ | ಅನುಮೋದನೆಗೊಂಡ ಕಾರ್ಯಕ್ರಮಗಳು | ಬಿಡುಗಡೆ ಮಾಡಲಾದ ಅನುದಾನ |
|---|---|---|
| 1 | ಚಿಕ್ಕಮಗಳೂರು ಜಿಲ್ಲೆ ಇತಿಹಾಸ ಮತ್ತು ಪುರಾತತ್ವ ಕುರಿತ ವಿಚಾರ ಸಂಕಿರಣ | ರೂ. 1.00 ಲಕ್ಷ |
| 2 | ತುಮಕೂರು ಜಿಲ್ಲೆ ಇತಿಹಾಸ ಮತ್ತು ಪುರಾತತ್ವ ಕುರಿತ ವಿಚಾರ ಸಂಕಿರಣ | ರೂ. 1.00 ಲಕ್ಷ |
| 3 | ಹಂಪಿ–14ನೇ ವಿಜಯನಗರ ಅಧ್ಯಯನ ಕುರಿತು ವಿಚಾರ ಸಂಕಿರಣ | ರೂ. 1.50 ಲಕ್ಷ |
| 4 | ದಿ ಸೌತ್ ಇಂಡಿಯನ್ ನ್ಯೂಮಸ್‌ಮ್ಯಾಟಿಕ್ ಸೊಸೈಟಿ ಇವರ ಸಹಯೋಗದೊಂದಿಗೆ ಉಡುಪಿ ಜಿಲ್ಲೆಯಲ್ಲಿ ಏರ್ಪಡಿಸುವ ದಕ್ಷಿಣ ಭಾರತದ ನಾಣ್ಯಶಾಸ್ತ್ರ ಸಮ್ಮೇಳನವನ್ನು | ರೂ. 1.50 ಲಕ್ಷ |
| 5 | ಭಾರತೀಯ ಶಾಸನಶಾಸ್ತ್ರ ಸೊಸೈಟಿ ಮತ್ತು ಪ್ಲೇಸ್‌ನೇಮ್ ಸೊಸೈಟಿ (ರಿ) ಇವರ ಸಹಯೋಗದೊಂದಿಗೆ ರಾಷ್ಟ್ರೀಯ ಮಟ್ಟದ ಶಾಸನಶಾಸ್ತ್ರದ ಸಮ್ಮೇಳನ | ರೂ. 1.00 ಲಕ್ಷ |
| 6 | ದಸರಾ ಸಂದರ್ಭದಲ್ಲಿ ಮೈಸೂರಿನಲ್ಲಿ ಕೈಗೊಳ್ಳುವ ವಸ್ತು ಪ್ರದರ್ಶನ | ರೂ. 2.00 ಲಕ್ಷ |
| 7 | ಕಿತ್ತೂರಿನಲ್ಲಿ ಕೈಗೊಳ್ಳುವ ವಸ್ತು ಪ್ರದರ್ಶನ | ರೂ. 0.50 ಲಕ್ಷ |
| 8 | ಹಂಪಿಯಲ್ಲಿ ಕೈಗೊಳ್ಳುವ ವಸ್ತು ಪ್ರದರ್ಶನ | ರೂ. 0.50 ಲಕ್ಷ |
| 9 | ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು ಇವರ ಸಹಯೊಗದೊಂದಿಗೆ ಪರಂಪರೆ ಉಳಿಸಿ ಸಪ್ತಾಹ ಆಚರಣೆ | ರೂ. 0.75 ಲಕ್ಷ |
| 10 | ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅಧೀನ ಕಛೇರಿಗಳಾದ ಮಡಿಕೇರಿ, ಚಿತ್ರದುರ್ಗ ಮತ್ತು ಗುಲ್ಬರ್ಗಾಗಳಲ್ಲಿ ಪರಂಪರೆ ಉಳಿಸಿ ಸಪ್ತಾಹ ಆಚರಣೆ | ರೂ. 0.75 ಲಕ್ಷ |
| | **ಒಟ್ಟು** | **ರೂ. 10.50 ಲಕ್ಷ** |

ಬಿಡುಗಡೆ ಮಾಡಲಾದ ಅನುದಾನವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಉಪಯೋಗಿಸತಕ್ಕದ್ದು.

1. ಮಂಜೂರಾದ ಅನುದಾನವನ್ನು ಉದ್ದೇಶಿತ ಕಾರ್ಯಕ್ರಮಗಳಿಗೆ ಮಾತ್ರ ಬಳಸತಕ್ಕದ್ದು.
2. ಅನುದಾನ ಬಳಕೆಯಾಗಿರುವುದಕ್ಕೆ ಉಪಯೋಗತಾ ಪ್ರಮಾಣಪತ್ರ ಸಲ್ಲಿಸತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 059–ಇತರೇ ಖರ್ಚುಗಳು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ರವರ ಟಿಪ್ಪಣಿ ಸಂಖ್ಯೆ: ಇಡಿ 934 ಐಎಫ್(ಬಿಎ) 2008 ದಿನಾಂಕ 16–8–2008ರಲ್ಲಿ ನೀಡಿದ ಸಹಮತಿಯನ್ವಯ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–96ರಲ್ಲಿ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1364

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ವಿಷಯ :** 2008–09ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 015– ಪೂರಕ ವೆಚ್ಚದಡಿಯಲ್ಲು ರೂ. 7.00 ಲಕ್ಷ ಹೆಚ್ಚುವರಿ ಅನುದಾನವನ್ನು ಅದೇ ಲೆಕ್ಕಶೀರ್ಷಿಕೆಯ ಉಳಿತಾಯದಡಿಯಿಂದ ಪುನರ್ ವಿನಿಯೋಗದ ಮೂಲಕ ಭರಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರ ದಿನಾಂಕ 29–7–2008ರ ಪತ್ರ ಸಂಖ್ಯೆ: ಡಿಎಎಂ:ಎಸಿಟಿ:1:29:2008–09.

**ಪ್ರಸ್ತಾವನೆ :**

ಮೇಲೆ ಓದಲಾದ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರ ಪತ್ರದಲ್ಲಿ ಸದರಿಯವರು ಲೋಕೋಪಯೋಗಿ ಇಲಾಖೆಯ ಮತ್ತು ಉಪ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಕಮಲಾಪುರ, ಹಂಪಿ ಇವರುಗಳ ಪತ್ರಗಳನ್ನು ಉಲ್ಲೇಖಿಸಿ ದಿನಾಂಕ 1–7–1984ರ ನಂತರ ತೊಡಗಿಸಲಾಗಿರುವ ದಿನಗೂಲಿ ನೌಕರರಿಗೆ ದಿನಾಂಕ 1–4–1998ರಿಂದ ಅನ್ವಯವಾಗುವಂತೆ ಹೆಚ್ಚಾಗಿರುವ ಗ್ರಾಹಕ ಬೆಲೆ ಸೂಚ್ಯಂಕದ ಆಧಾರದ ಮೇಲೆ ಪ್ರತಿ ದಿನಕ್ಕೆ ಪ್ರತಿ ಅಂಶಕ್ಕೆ ಐದು ಪೈಸೆಯಂತೆ ಜೀವನ ನಿರ್ವಹಣಾ ಭತ್ಯೆಯನ್ನು ಪಾವತಿಸಲು ಸೂಚಿಸಿರುವ ಹಿನ್ನೆಲೆಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಹಂಪಿಯ ಉತ್ಖನನ ಶಿಬಿರದ 20 ದಿನಗೂಲಿ ನೌಕರರಿಗೆ ರೂ. 7.83 ಲಕ್ಷವನ್ನು ಪಾವತಿಸಬೇಕಾಗುತ್ತದೆಂದು ತಿಳಿಸಿರುವರು. ಮುಂದುವರಿದು ಈ ನಿಟ್ಟಿನಲ್ಲಿ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 015– ಪೂರಕ ವೆಚ್ಚ ಅಡಿಯಲ್ಲಿ 7.00 ಲಕ್ಷ ರೂ.ಗಳ ಹೆಚ್ಚುವರಿ ಹಣದ ಅವಶ್ಯಕತೆ ಇದೆಯೆಂದು ತಿಳಿಸಿ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 041 ಪ್ರಯಾಣ ವೆಚ್ಚಗಳ ಅಡಿಯಲ್ಲಿ 2.00 ಲಕ್ಷ ರೂಪಾಯಿ–015–ಸಾಮಾನ್ಯ ವೆಚ್ಚಗಳ ಅಡಿಯಲ್ಲಿ ರೂ. 5.00 ಲಕ್ಷವನ್ನು ಒಟ್ಟಾರೆ ರೂ. 7.00 ಲಕ್ಷವನ್ನು ಉಳಿತಾಯದ ಹಣದಿಂದ ನೀಡಲು ಪ್ರಸ್ತಾಪಿಸಿರುವರು. ಅದಕ್ಕೆ ಸಂಬಂಧಿಸಿದಂತೆ ಪುನರ್ ವಿನಿಯೋಗದ ನಮೂನೆ ಕೆ.ಎಫ್.ಸಿ.–22–ಎ ಯನ್ನು ಒದಗಿಸಿ ಮಂಜೂರಾತಿ ನೀಡುವಂತೆ ಕೋರಿರುವರು. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 166 ಕೆಎಂಯು 2008, ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್ 2008.**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಹಂಪಿಯ ಉತ್ಖನನ ಶಿಬಿರದ 20 ದಿನಗೂಲಿ ನೌಕರರಿಗೆ ಹೆಚ್ಚಾಗಿರುವ ಗ್ರಾಹಕ ಬೆಲೆ ಸೂಚ್ಯಂಕದ ಆಧಾರದ ಮೇಲೆ ದಿನಾಂಕ 1–4–1998ರಿಂದ ಅನ್ವಯವಾಗುವಂತೆ ಪ್ರತಿ ದಿನಕ್ಕೆ ಪ್ರತಿ ಅಂಶಕ್ಕೆ ಐದು ಪೈಸೆಯಂತೆ ಜೀವನ ನಿರ್ವಹಣಾ ಭತ್ಯೆಯನ್ನು ಪಾವತಿಸಲು ಒಟ್ಟು ರೂ. 7.00 ಲಕ್ಷಗಳನ್ನು (ರೂಪಾಯಿ ಏಳು ಲಕ್ಷಗಳು ಮಾತ್ರ) ಪೂರಕ ವೆಚ್ಚದಡಿಯಲ್ಲಿ ಪಾವತಿಸಲು ಪುನರ್ ವಿನಿಯೋಗದ ಮೂಲಕ ಭರಿಸಲು ಆದೇಶಿಸಲಾಗಿದೆ.

ಮೇಲಿನ ವೆಚ್ಚವನ್ನು ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 041–ವೆಚ್ಚಗಳ ಅಡಿಯಲ್ಲಿ ರೂ. 2.00 ಲಕ್ಷಗಳನ್ನು ಹಾಗೂ 051–ಸಾಮಾನ್ಯ ವೆಚ್ಚಗಳ ಅಡಿಯಲ್ಲಿ ರೂ. 5.00 ಲಕ್ಷ (ಒಟ್ಟು ರೂ. 7.00 ಲಕ್ಷ) ಹಣವನ್ನು ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 015–ಪೂರಕ ವೆಚ್ಚದಡಿಯಲ್ಲಿ ಪುನರ್ ವಿನಿಯೋಗದ ಮೂಲಕ ಭರಿಸತಕ್ಕದ್ದು.

ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ರವರ ಟಿಪ್ಪಣಿ ಸಂಖ್ಯೆ: ಇಡಿ 989 ಐಎಫ್ (ಬಿಎ) 2008, ದಿನಾಂಕ 26–8–2008ರಲ್ಲಿ ಸಹಮತಿಯನ್ನು ಪಡೆದು ಹಾಗೂ ಆರ್ಥಿಕ ಇಲಾಖೆ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–1997ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1479

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ವಿಷಯ :** ಶ್ರೀ ಜೆ.ಎನ್. ಶಾಮರಾವ್, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಪ್ರಸ್ತುತ ವ್ಯವಸ್ಥಾಪಕರು, ಸುವರ್ಣ ಕರ್ನಾಟಕ ಘಟಕ) ಇವರು ಸರ್ಕಾರಿ ಸೇವೆಯಿಂದ ಸ್ವಯಂ ನಿವೃತ್ತಿ ಹೊಂದುವ ಬಗ್ಗೆ.

**ಓದಲಾಗಿದೆ:** 1. ಶ್ರೀ ಜೆ.ಎನ್. ಶಾಮರಾವ್, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಮನವಿ ದಿನಾಂಕ 3–9–2007, 9–4–2008.

2. ಶ್ರೀ ಜೆ.ಎನ್. ಶಾಮರಾವ್, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಮನವಿ ದಿನಾಂಕ 11–6–2008.

3. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಕಸನಿ:41: ಸಿಬ್ಬಂದಿ:2007–08, ದಿನಾಂಕ 1–1–2008 ಮತ್ತು ಮುಂದುವರಿದ ಪತ್ರವ್ಯವಹಾರ.

**ಪ್ರಸ್ತಾವನೆ :**

ಶ್ರೀ ಜೆ.ಎನ್. ಶಾಮರಾವ್, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಪ್ರಸ್ತುತ ವ್ಯವಸ್ಥಾಪಕರು, ಸುವರ್ಣ ಕರ್ನಾಟಕ ಘಟಕ) ಕೇಂದ್ರ ಕಛೇರಿ, ಬೆಂಗಳೂರು ರವರು ಮೇಲೆ ಓದಲಾದ (1)ರ ತಮ್ಮ ಮನವಿಯಲ್ಲಿ ವೈಯಕ್ತಿಕ ಕಾರಣಗಳಿಂದಾಗಿ ದಿನಾಂಕ 1–3–2008ರಿಂದ ಅನ್ವಯವಾಗುವಂತೆ ಸ್ವಯಂ ನಿವೃತ್ತಿ ಹೊಂದಲು ಇಚ್ಛಿಸಿದ್ದು, ಕರ್ನಾಟಕ ನಾಗರೀಕ ಸೇವೆಗಳ ನಿಯಮ 285(1)(ಎ) ರಡಿಯಲ್ಲಿ ಸ್ವಯಂ ನಿವೃತ್ತಿ ಹೊಂದಲು ಸರ್ಕಾರದ ಅನುಮತಿ ಕೋರಿರುತ್ತಾರೆ. ತದನಂತರ ಮೇಲೆ ಓದಲಾದ (2)ರ ಮನವಿಯಲ್ಲಿ ದಿನಾಂಕ 1–10–2008ರಿಂದ ಜಾರಿಗೆ ಬರುವಂತೆ ಸ್ವಯಂ ನಿವೃತ್ತಿಯನ್ನು ಹೊಂದಲು ಕೋರಿಕೆ ಸಲ್ಲಿಸಿರುತ್ತಾರೆ. ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ರವರು ಶ್ರೀ ಜೆ.ಎನ್. ಶಾಮರಾವ್ ರವರಿಗೆ ದಿನಾಂಕ 1–10–2008 ರಿಂದ ಜಾರಿಗೆ ಬರುವಂತೆ ಸ್ವಯಂ ನಿವೃತ್ತಿ ಹೊಂದಲು ಸರ್ಕಾರದ ಅನುಮತಿ ನೀಡುವಂತೆ ಕೊರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 2 ಕಸನಿ 2008 ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2008**.

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಜೆ.ಎನ್. ಶಾಮರಾವ್, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಪ್ರಸ್ತುತ ವ್ಯವಸ್ಥಾಪಕರು, ಸುವರ್ಣ ಕರ್ನಾಟಕ ಘಟಕ) ಕೇಂದ್ರ ಕಛೇರಿ, ಬೆಂಗಳೂರು ರವರಿಗೆ ಕರ್ನಾಟಕ ನಾಗರೀಕ ಸೇವೆಗಳ ನಿಯಮ 285(1)(ಎ) ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸ್ವಯಂ ನಿವೃತ್ತಿ ಹೊಂದಲು ಸರ್ಕಾರದ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1472

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಇನ್ಸ್ಟಿಟ್ಯೂಟ್ ಆಫ್ ಬಯೋ ಇನ್‌ಫರ್‌ಮ್ಯಾಟಿಕ್ಸ್ ಆಂಡ್ ಅಪ್ಲೈಡ್ ಬಯೋಟೆಕ್ನಾಲಜಿ (IBAB) ಸಂಸ್ಥೆಗೆ 2008–09ನೇ ಸಾಲಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ – ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ITD 24 MDA 2008, ದಿ: 12–6–2008.

2. ಸರ್ಕಾರಿ ಆದೇಶ ಸಂಖ್ಯೆ: ITD 17 MDA 2008, ದಿ: 23–5–2008.

3. ಸರ್ಕಾರಿ ಆದೇಶ ಸಂಖ್ಯೆ: ITD 17 MDA 2008, ದಿ: 8–9–2008.

4. ಐಬಿಎಬಿ ಸಂಸ್ತೆಯ ನಿರ್ದೇಶಕರ ಪತ್ರದ ಸಂ: IBAB/Rent/Sept/2008, ದಿನಾಂಕ 6–10–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿನ ಅನುಬಂಧದಲ್ಲಿ ಲೆಕ್ಕಶೀರ್ಷಿಕೆ 3451–11–090–2–01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ –059 – ಇತರೆ ಖರ್ಚು, ಇದರಡಿಯಲ್ಲಿ 2008–09ನೇ ಸಾಲಿಗೆ ಒದಗಿಸಲಾಗಿರುವ ರೂ. 600.00 ಲಕ್ಷಗಳ ಅನುದಾನದಲ್ಲಿ ಐಬಿಎಬಿ ಸಂಸ್ಥೆಯ ಬಾಡಿಗೆಗಾಗಿ (For extending Government support to the Institute of Bioinformatics and Applied Biotechnology (IBAB), ರೂ. 96.00 ಲಕ್ಷಗಳನ್ನು ಹಂಚಿಕೆ ಮಾಡಲಾಗಿದೆ.

ಸರ್ಕಾರವು ಇನ್ಸ್ಟಿಟ್ಯೂಟ್ ಆಫ್ ಬಯೋ ಇನ್‌ಫರ್‌ಮ್ಯಾಟಿಕ್ಸ್ ಆಂಡ್ ಅಪ್ಲೈಡ್ ಬಯೋಟೆಕ್ನಾಲಜಿ (IBAB) ಸಂಸ್ಥೆಯ ಆವರಣಕ್ಕಾಗಿ (ಪ್ರಿಮಿಸಸ್) ಬಾಡಿಗೆಗೆ ಸಂಬಂಧಿಸಿದಂತೆ ಐ.ಟಿ.ಪಿ.ಎಲ್. ಸಂಸ್ಥೆಗೆ ನೀಡಲು ತ್ರೈಮಾಸಿಕ ಅನುದಾನಗಳನ್ನು ಮಾರ್ಚ್ 2006 ರಿಂದ ಆಗಿಂದಾಗ್ಗೆ ಬಿಡುಗಡೆ ಮಾಡುತ್ತಲಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಫೆಬ್ರವರಿ 2008 ರ ಹೆಚ್ಚುವರಿ ಬಾಡಿಗೆ ಬಾಬ್ತು ರೂ. 2.5 ಲಕ್ಷಗಳನ್ನು ಒಳಗೊಂಡಂತೆ ಮಾರ್ಚ್ – 2008 ರಿಂದ ಮೇ – 2008 ರವರೆಗಿನ ತ್ರೈಮಾಸಿಕ ಬಾಡಿಗೆಯ ಬಾಬ್ತು ರೂ. 34.00 ಲಕ್ಷಗಳನ್ನು ಹಾಗೂ ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಜೂನ್–2008 ರಿಂದ ಆಗಸ್ಟ್ 2008 ರವರೆಗಿನ ಬಾಡಿಗೆ ಬಾಬ್ತು ರು. 315 ಲಕ್ಷಗಳ ಅನುದಾನವನ್ನು ಐಬಿಎಬಿ ಸಂಸ್ಥೆಗೆ ಈಗಾಗಲೇ ಬಿಡುಗಡೆ ಮಾಡಲಾಗಿದೆ.

ಮೇಲೆ (4)ರಲ್ಲಿ ಓದಲಾದ ಐಬಿಎಬಿ ಸಂಸ್ಥೆಯ ನಿರ್ದೇಶಕರ ಪತ್ರದಲ್ಲಿ ಐಬಿಎಬಿ ಸಂಸ್ಥೆಯ ಆವರಣಕ್ಕಾಗಿ ತ್ರೈಮಾಸಿಕ ಬದಲು ಪ್ರತಿ ತಿಂಗಳು ಬಾಡಿಗೆ ಪಾವತಿ ಮಾಡಬೇಕಾಗಿರುವುದರಿಂದ ಸೆಪ್ಟೆಂಬರ್–2008ರ ಬಾಡಿಗೆಯ ಬಾಬ್ತು ರೂ. 10.5 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಲಾಗಿದೆ. ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸೆಪ್ಟೆಂಬರ್ ತಿಂಗಳ ಬಾಡಿಗೆ ಬಾಬ್ತು ರೂ. 10.5 ಲಕ್ಷಗಳ ಅನುದಾನವನ್ನು ಐಬಿಎಬಿ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 17 ಅಚವಿ 2008, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2008**.

ಪ್ರಸ್ತಾವನೆಯಲ್ಲಿ ಹೇಳಿದ ಸಂದರ್ಭದಲ್ಲಿ ಐಬಿಎಬಿ ಆವರಣದ ಸೆಪ್ಟೆಂಬರ್–2008ರ ಬಾಡಿಗೆ ಬಾಬ್ತು ರೂ. 10.5 ಲಕ್ಷ (ಹತ್ತು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಅನುದಾನವನ್ನು, ಐ.ಟಿ.ಪಿ.ಎಲ್. ಸಂಸ್ಥೆಗೆ ಪಾವತಿಸುವ ಸಂಬಂಧ ಐಬಿಎಬಿ ಸಂಸ್ಥೆಗೆ ವಿತರಿಸಲು, ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ '3451–00–090–2–01 ಮಾಹಿತಿ ತಂತ್ರಜ್ಞಾನದ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ವೆಚ್ಚ (ಯೋಜನೆ)' ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ನಿರ್ದೇಶಕರು, ಐಬಿಎಬಿ ಸಂಸ್ಥೆ, ಇವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–5–2008ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1505

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ

ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಹಾವೇರಿಯಲ್ಲಿ ಹುತಾತ್ಮ ಮೈಲಾರ ಮಹಾದೇವಪ್ಪನವರ ಸ್ಮಾರಕದ ಅಭಿವೃದ್ಧಿಗೆ ಹಾಗೂ ಸಾಂಸ್ಕೃತಿಕ ಭವನ ನಿರ್ಮಾಣ ಮಾಡಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 17 ವೀಸೌನಿ 2000 ದಿನಾಂಕ 3-3-2000.

2. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 1 ವೀಸೌನಿ 2003, ದಿನಾಂಕ 19-3-2003.

3. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 7 ವೀಸೌನಿ 2004, ದಿನಾಂಕ 6-1-2005.

4. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಕಸನಿ/156/ ವೀರಸೌ/2001-02, ದಿನಾಂಕ 17-7-2008 ಮತ್ತು 28-8-2008.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) (2) ಮತ್ತು (3)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಹುತಾತ್ಮ ಮೈಲಾರ ಮಹಾದೇವಪ್ಪನವರ ಸಮಾಧಿ ಬಳಿ ವೀರಸೌಧ ನಿರ್ಮಿಸಲು ಒಟ್ಟು ರೂ. 15.00 ಲಕ್ಷಗಳನ್ನು ಜಿಲ್ಲಾಧಿಕಾರಿ, ಹಾವೇರಿ ಜಿಲ್ಲೆ ರವರಿಗೆ ಈಗಾಗಲೇ ಬಿಡುಗಡೆ ಮಾಡಲಾಗಿರುತ್ತದೆ. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ರವರು ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ, ಹಾವೇರಿ ಜಿಲ್ಲೆ ಇವರು ಹಾವೇರಿಯಲ್ಲಿ ಈಗಾಗಲೇ ನಿರ್ಮಿಸಿರುವ ಹುತಾತ್ಮ ಮೈಲಾರ ಮಹಾದೇವಪ್ಪನವರ ವೀರಸೌಧದ ಬಳಿ ಸಾಂಸ್ಕೃತಿಕ ಭವನ ನಿರ್ಮಾಣ, ಅದರ ಅಲಂಕಾರಿಕ ಕೆಲಸ, ಶಬ್ದ ನಿಯಂತ್ರಣದ ವ್ಯವಸ್ಥೆ ಹಾಗೂ ಆಸನಗಳ ವ್ಯವಸ್ಥೆ, ಆವರಣದ ಶೀಲಾನ್ಯಾಸದಲ್ಲಿರುವ ಹಳ್ಳಕ್ಕೆ ರಕ್ಷಣಾಗೋಡೆ, ಆವರಣದ ಗೋಡೆಗಳನ್ನು ನಿರ್ಮಿಸಲು ಉದ್ದೇಶಿಸಿರುವುದಾಗಿಯೂ, ಆವರಣದ ಲ್ಯಾಂಡ್‌ಸ್ಕೇಪಿಂಗ್, ಫೌಂಟೇನ್, ಫುಟ್‌ಪಾತ್ ಇತ್ಯಾದಿ ಕಾಮಗಾರಿಗಳಿಗಾಗಿ ನೀಲಿ ನಕ್ಷೆಯನ್ನು ಸಿದ್ಧಪಡಿಸಿ ರೂ. 1,08,50,000/-ಗಳ ಅನುದಾನವನ್ನು ಮಂಜೂರು ಮಾಡುವಂತೆ ಕೋರುತ್ತಾರೆಂದು ತಿಳಿಸಿರುತ್ತಾರೆ. ಮೇಲಿನ ಉದ್ದೇಶಕ್ಕಾಗಿ ರೂ. 75.00 ಲಕ್ಷಗಳನ್ನು ಜಿಲ್ಲಾಧಿಕಾರಿ, ಹಾವೇರಿ ಜಿಲ್ಲೆ ರವರಿಗೆ ಬಿಡುಗಡೆ ಮಾಡಲು ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಮುಂದಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 28 ಸ್ಮಾಪ್ರನಿ 2008, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2008**.

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಹಾವೇರಿಯಲ್ಲಿ ಈಗಾಗಲೇ ನಿರ್ಮಿಸಿರುವ ಹುತಾತ್ಮ ಮೈಲಾರ ಮಹಾದೇವಪ್ಪನವರ ವೀರಸೌಧದ ಬಳಿ ಸಾಂಸ್ಕೃತಿಕ ಭವನ ನಿರ್ಮಾಣ, ಅದರ ಅಲಂಕಾರಿಕ ಕೆಲಸ, ಶಬ್ದ ನಿಯಂತ್ರಣದ ವ್ಯವಸ್ಥೆ ಹಾಗೂ ಆಸನಗಳ ವ್ಯವಸ್ಥೆ, ಆವರಣದ ಶಿಲಾನ್ಯಾಸದಲ್ಲಿರುವ ಹಳ್ಳಕ್ಕೆ ರಕ್ಷಣಾ ಗೋಡೆ, ಆವರಣದ ಗೋಡೆಗಳನ್ನು ನಿರ್ಮಿಸಲು, ಆವರಣದ ಲ್ಯಾಂಡ್‌ಸ್ಕೇಪಿಂಗ್, ಫೌಂಟೇನ್, ಫುಟ್‌ಪಾತ್ ಇತ್ಯಾದಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ರೂ. 75.00 ಲಕ್ಷಗಳನ್ನು (ರೂಪಾಯಿ ಎಪ್ಪತ್ತೈದು ಲಕ್ಷಗಳು ಮಾತ್ರ) ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ರವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರಿಗೆ ಕೆಳಕಂಡ ಷರತ್ತಿಗೆ ಒಳಪಟ್ಟು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

1. ಕಾಮಗಾರಿಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಕಾಯ್ದೆ ಹಾಗೂ ನಿಯಮಗಳನ್ನು ಅನುಸರಿಸಿ ನಿರ್ವಹಿಸತಕ್ಕದ್ದು.
2. ಬಿಡುಗಡೆ ಮಾಡಲಾದ ಅನುದಾನವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕೆ ಬಳಸತಕ್ಕದ್ದು.
3. ಹಣ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-00-102-4-31-059 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ರವರ ಟಿಪ್ಪಣಿ ಸಂಖ್ಯೆ: ಇಡಿ 1151 ಐಎಫ್ (ಬಿಎ) 2008, ದಿನಾಂಕ 25-9-2008ರಲ್ಲಿ ನೀಡಿರುವ ಸಹಮತಿಯ

ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1473

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶ್ರೀಮತಿ ಜುಬೇರಿಯಾ ಬೇಗಂ, ನೋಟರಿ, ಬೆಂಗಳೂರು (ನಗರ) ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆಯುವ ಬಗ್ಗೆ.

**ಓದಲಾಗಿದೆ:**
1. ಪತ್ರ ಸಂಖ್ಯೆ: ರಾಚುಆ:5:ಇಯುಬಿ:2003, ದಿನಾಂಕ 13–10–2003, ಅಧೀನ ಕಾರ್ಯದರ್ಶಿ (ಪ್ರಭಾರ), ರಾಜ್ಯ ಚುನಾವಣಾ ಆಯೋಗ, ಬೆಂಗಳೂರು.
2. ಸರ್ಕಾರದ ಪತ್ರ ಸಂಖ್ಯೆ: ಲಾ 122 ಎಲ್‌ಸಿಎಲ್ 2003, ದಿನಾಂಕ 6–1–2004 ಮತ್ತು ಲಾ 128 ಎಲ್‌ಸಿಎಲ್ 2005 ದಿನಾಂಕ 22–11–2005.
3. ಪತ್ರ ಸಂಖ್ಯೆ: ಎಡಿಎಂ.I (ಬಿ) 298/2006, ದಿನಾಂಕ 19–12–2006 ರಿಜಿಸ್ಟ್ರಾರ್, ಸಿಟಿ ಸಿವಿಲ್ ನ್ಯಾಯಾಲಯ, ಬೆಂಗಳೂರುರವರಿಂದ.
4. ಸರ್ಕಾರದ ಪತ್ರ ಸಂಖ್ಯೆ: ಲಾ 06 ಎಲ್‌ಸಿಎಲ್ 2007, ದಿನಾಂಕ 17–1–2007 ಮತ್ತು ಜ್ಞಾಪನ ಪತ್ರ 12–6–2007.
5. ಪತ್ರ ಸಂಖ್ಯೆ: ಸಿಸಿಸಿ/ಎಡಿಎಂ–I (ಬಿ) 297/2007, ದಿನಾಂಕ 27–12–2007 ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು.
6. ಸರ್ಕಾರದ ಟಿಪ್ಪಣಿ ಸಂಖ್ಯೆ: ಲಾ 128 ಎಲ್‌ಸಿಎಲ್ 2005, ದಿನಾಂಕ 11–2–2008 ಮತ್ತು ಪತ್ರ ದಿನಾಂಕ 26–4–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 28–11–2008ರ ಪತ್ರದಲ್ಲಿ ರಾಜ್ಯ ಚುನಾವಣಾ ಆಯೋಗ, ಬೆಂಗಳೂರು ಇವರು ಶ್ರೀಮತಿ ಜುಬೇರಿಯಾ ಬೇಗಂ, ನೋಟರಿ ಬೆಂಗಳೂರು ಇವರು ಧೃಢೀಕರಿಸಿದ ಪ್ರಮಾಣ ಪತ್ರದಲ್ಲಿ ನ್ಯೂನತೆಗಳಿರುವುದನ್ನು ಗುರುತಿಸಿ ಅವರು ಕರ್ತವ್ಯ ಲೋಪವೆಸಗಿರುವುದರಿಂದ ಅವರ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ಆ ಮೇರೆಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ 6–1–2004 ಮತ್ತು 19/22–11–2005ರ ಪತ್ರದಲ್ಲಿ ಶ್ರೀಮತಿ ಜುಬೇರಿಯಾ ಬೇಗಂ, ನೋಟರಿ, ಬೆಂಗಳೂರು (ನಗರ) ಇವರಿಂದ ನೋಟರಿ ನಿಯಮಾನುಸಾರ ಲಿಖಿತ ಹೇಳಿಕೆ ಸಲ್ಲಿಸುವಂತೆ ಕೋರಲಾಗಿತ್ತು. ಮತ್ತು ದಿನಾಂಕ 19/22–11–2005ರ ಸದರಿ ಪತ್ರದ ಪ್ರತಿಯನ್ನು ಪೂರಕ ದಾಖಲೆಗಳ ಸಹಿತ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರುರವರಿಗೂ ಕಳುಹಿಸಿ, ನೋಟರಿಯವರ ವಿವರಣೆ ಪಡೆದು, ಪರಿಶೀಲಿಸಿ ವಿಚಾರಣಾ ವರದಿಯನ್ನು ಕಳುಹಿಸಿಕೊಡುವಂತೆ ಸಹಾ ಕೋರಲಾಗಿತ್ತು.

ಈ ಮಧ್ಯೆ ರಿಜಿಸ್ಟ್ರಾರ್, ನಗರ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರುರವರು ದಿನಾಂಕ 19–12–2006ರ ಉಲ್ಲೇಖಿತ(3)ರ ಪತ್ರದೊಂದಿಗೆ ನೋಟರಿಯವರು ದಿನಾಂಕ 3–12–2006 ರಿಂದ ನೋಟರಿ ಪ್ರಮಾಣ ಪತ್ರ ನವೀಕರಣಕ್ಕಾಗಿ ಸಲ್ಲಿಸಿರುವ ಮನವಿಯನ್ನು ಕಳುಹಿಸಿ, ಇವರ ವಿರುದ್ಧ ಉಲ್ಲೇಖಿತ (2)ರ ದಿನಾಂಕ 22–11–2005ರ ಪತ್ರದನ್ವಯ ಆರಂಭಿಸಿರುವ ವಿಚಾರಣೆಯು ಬಾಕಿಯಿರುವುದಾಗಿ ತಿಳಿಸಿದ್ದರು.

ದಿನಾಂಕ 19/22–11–05ರ ಪತ್ರಕ್ಕೆ ಶ್ರೀಮತಿ ಜುಬೇರಿಯಾ ಬೇಗಂ, ನೋಟರಿ ಇವರು ಯಾವುದೇ ಲಿಖಿತ ಉತ್ತರ ನೀಡದೆ ಅವರ ವೃತ್ತಿ ಪ್ರಮಾಣ ಪತ್ರವನ್ನು ನವೀಕರಿಸುವಂತೆ ಕೋರಿದ್ದರಿಂದ ಮತ್ತು ಇವರ ವಿರುದ್ಧದ ವಿಚಾರಣಾ ವರದಿ

ಬಾಕಿಯಿದ್ದ ಕಾರಣ ಮೇಲೆ (4)ರಲ್ಲಿ ಓದಲಾದ ದಿನಾಂಕ 17–1–2007ರ ಪತ್ರದಲ್ಲಿ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು (ನಗರ) ಇವರನ್ನು ನೋಟರಿಯವರು ವೃತ್ತಿ ಪ್ರಮಾಣ ಪತ್ರದ ಅವಧಿ ದಿನಾಂಕ 3–12–2006ಕ್ಕೆ ಅಂತ್ಯಗೊಂಡ ನಂತರವೂ ಅವರು ನೋಟರಿ ಕರ್ತವ್ಯ ನಿರ್ವಹಿಸಿರುವರೆ/ನಿರ್ವಹಿಸುತ್ತಿದ್ದಾರೆಯೇ? ಎಂಬ ಬಗ್ಗೆ ಮಾಹಿತಿಯೊಂದಿಗೆ ಸದರಿ ನೋಟರಿಯವರ ವಿರುದ್ಧ ಬಾಕಿಯಿರುವ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಕೋರಲಾಗಿತ್ತು.

ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು (ನಗರ) ಇವರು ಮೇಲೆ (5)ರಲ್ಲಿ ಓದಲಾದ ದಿನಾಂಕ 27–12–2007ರ ಪತ್ರದೊಂದಿಗೆ ಶ್ರೀಮತಿ ಜುಬೇರಿಯಾ ಬೇಗಂ, ನೋಟರಿ, ಬೆಂಗಳೂರು ಇವರಿಗೆ ಸಂಬಂಧಿಸಿದ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ನೋಟರಿ ನಿಯಮ 11ರಲ್ಲಿ ಸ್ಪಷ್ಟಪಡಿಸಿರುವಂತೆ ಉಲ್ಲೇಖಿತ (1)ರಲ್ಲಿ ತಿಳಿಸಿರುವ ಪ್ರಮಾಣ ಪತ್ರಗಳನ್ನು ದೃಢೀಕರಿಸಿರುವ ಬಗ್ಗೆ ವಿವರಗಳನ್ನು ನೋಟರಿ ರಿಜಿಸ್ಟರ್‌ನಲ್ಲಿ ನಮೂದಿಸಿರುವುದಿಲ್ಲ. ಇದರಿಂದ ನೋಟರಿಯವರು ನೋಟರಿ ನಿಯಮಾವಳಿಗಳನ್ನು ಉಲ್ಲಂಘಿಸಿರುವುದಾಗಿ ತಿಳಿಸಿರುತ್ತಾರೆ. ಆ ಬಗ್ಗೆ ವಿಚಾರಣಾ ವರದಿಯನ್ನು ನೋಟರಿಯವರಿಗೆ ಉಲ್ಲೇಖಿತ (6)ರ ಟಿಪ್ಪಣಿ ದಿನಾಂಕ 11–2–2008ರಲ್ಲಿ ಕಳುಹಿಸಿ ವರದಿ ಬಗ್ಗೆ ಲಿಖಿತ ಹೇಳಿಕೆ ಏನಾದರೂ ಇದ್ದಲ್ಲಿ ಸಲ್ಲಿಸುವಂತೆ ಕೋರಲಾಗಿತ್ತು ಮತ್ತು ನೋಟರಿ ನಿಯಮ 13(12)ರ ಪ್ರಕಾರ ಕ್ರಮವಹಿಸುವ ಕುರಿತು ದಿನಾಂಕ 26–4–2008ರ ಪತ್ರದಲ್ಲಿ ಜ್ಞಾಪಿಸಲಾಗಿತ್ತು.

ಆದರೆ ಸದರಿ ಟಿಪ್ಪಣಿ ಹಾಗೂ ಪತ್ರಕ್ಕೆ ಬಹಳಷ್ಟು ಕಾಲಾವಕಾಶ ನೀಡಿದರೂ ಸಹಾ ಶ್ರೀಮತಿ ಜುಬೇರಿಯಾ ಬೇಗಂ, ನೋಟರಿ, ಬೆಂಗಳೂರು (ನಗರ) ಇವರಿಂದ ಯಾವುದೇ ಲಿಖಿತ ವಿವರಣೆಯಾಗಲಿ ಖುದ್ದು ಹೇಳಿಕೆಯನ್ನಾಗಲಿ ನೀಡಿರುವುದಿಲ್ಲ. ಆದರೆ, ದಿನಾಂಕ 3–12–2006 ರಿಂದ ನೋಟರಿ ಕರ್ತವ್ಯ ನಿರ್ವಹಿಸಿರುವುದಿಲ್ಲವೆಂದು, ಅನಾರೋಗ್ಯ ನಿಮಿತ್ತ ನೋಟರಿ ನವೀಕರಣ ಮಾಡಿಕೊಳ್ಳಲು ಸಾಧ್ಯವಾಗಿಲ್ಲವೆಂದು ದಿನಾಂಕ 11–2–2008ರ ಪತ್ರದಲ್ಲಿ ತಿಳಿಸಿದ್ದಾರೆ.

ಈ ಹಿನ್ನೆಲೆಯಲ್ಲಿ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲಾ 128 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2008**.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀಮತಿ ಜುಬೇರಿಯಾ ಬೇಗಂ, ನೋಟರಿ, ಬೆಂಗಳೂರು (ನಗರ) ಇವರ ಹೆಸರನ್ನು ನೋಟರಿ ಕಾಯ್ದೆ ಕಲಂ 10(ಸಿ) ಮತ್ತು ನಿಯಮ 13(12)(b)(i) ರೀತ್ಯ ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1534

**ಶಕುಂತಲಾ ಹೆಚ್.ಆರ್**.

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ವಿಷಯ :** ಶ್ರೀಮತಿ ಭಾಗ್ಯಕುಮಾರಿ, ನೋಟರಿ, ಬೆಂಗಳೂರು (ನಗರ) ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆಯುವ ಬಗ್ಗೆ.

**ಓದಲಾಗಿದೆ:**

1. ಪತ್ರ ಸಂಖ್ಯೆ 26:ಪಿಓಎಲ್:ನೋಟರಿ/1998, ದಿನಾಂಕ 27–9–2004, ರಿಜನಲ್ ಪಾಸ್‌ಪೋರ್ಟ್ ಆಫೀಸರ್, ಬೆಂಗಳೂರು.
2. ಕಾರಣ ಕೇಳುವ ನೋಟೀಸ್ ಸಂಖ್ಯೆ ಲಾ 97 ಎಲ್‌ಸಿಎಲ್ 2004, ದಿನಾಂಕ 12–10–2004 ಹಾಗೂ ದಿನಾಂಕ 3–3–2005ರ ಜ್ಞಾಪಕ ಪತ್ರ.
3. ಶ್ರೀಮತಿ ಎನ್. ಭಾಗ್ಯಕುಮಾರಿ, ನೋಟರಿ, ಬೆಂಗಳೂರು (ನಗರ) ಇವರ ಲಿಖಿತ ಹೇಳಿಕೆ ದಿನಾಂಕ 17–3–2005.
4. ಸರ್ಕಾರದ ಪತ್ರ ಸಂಖ್ಯೆ ಲಾ 97 ಎಲ್‌ಸಿಎಲ್ 2004 ದಿನಾಂಕ 29–6–2005ರ ಮತ್ತು ಜ್ಞಾಪಕ ಪತ್ರ ದಿನಾಂಕ 3–8–2005.
5. ವಿಚಾರಣಾ ವರದಿ ಪತ್ರ ಸಂಖ್ಯೆ ಡಿಪಿಎಸ್ (ಸಿಸಿಸಿ) 73/2006, ದಿನಾಂಕ 25–11–2006ರ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ರವರಿಂದ.

6. ಸರ್ಕಾರದ ಪತ್ರ ಸಂಖ್ಯೆ ಲಾ 97 ಎಲ್‌ಸಿಎಲ್ 2004, ದಿನಾಂಕ 2–5–2007 ಹಾಗೂ ಜ್ಞಾಪಕ ಪತ್ರ ದಿನಾಂಕ 28–7–2007, ಅರೆ ಸರ್ಕಾರಿ ಪತ್ರ ದಿನಾಂಕ 28–11–2007, 8–1–2008 ಮತ್ತು 21–5–2008.
7. ವಿಚಾರಣಾ ವರದಿ ಪತ್ರ ಸಂಖ್ಯೆ ಎಡಿಬಿ–I(B)/137/2008, ದಿನಾಂಕ 26ನೇ ಜೂನ್ 2008ರ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ರವರಿಂದ.
8. ಲಾ 97 ಎಲ್‌ಸಿಎಲ್ 2004, ದಿನಾಂಕ 28–7–2008ರ ಕಾರಣ ಕೇಳುವ ನೋಟೀಸ್.
9. ಶ್ರೀಮತಿ ಎನ್. ಭಾಗ್ಯಕುಮಾರಿ ಇವರ ಲಿಖಿತ ಹೇಳಿಕೆ ದಿನಾಂಕ 1–8–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 27–9–2004ರ ಪತ್ರದಲ್ಲಿ ರಿಜನಲ್ ಪಾಸ್‌ಪೋರ್ಟ್ ಆಫೀಸರ್, ರೀಜನಲ್ ಪಾಸ್‌ಪೋರ್ಟ್ ಕಚೇರಿ, ಬೆಂಗಳೂರು ಇವರು ಶ್ರೀಮತಿ ಎನ್. ಭಾಗ್ಯಕುಮಾರಿ, ನೋಟರಿ, ಬೆಂಗಳೂರು (ನಗರ) ಇವರು ಶಪಥೀಕರಣ ಪ್ರಮಾಣ ಪತ್ರಗಳಲ್ಲಿ ಪ್ರಮಾಣಕಾರನ (deponent) ಸಹಿ ಇಲ್ಲದೆ ಇದ್ದರೂ ಅವುಗಳಲ್ಲಿ ಮೇಲು ರುಜು ಮಾಡಿ ಧೃಢೀಕರಿಸಿದ್ದ ಪ್ರಮಾಣ ಪತ್ರದ ಪ್ರತಿಯನ್ನು ಕಳುಹಿಸಿ ಇಂತಹ ಹಲವಾರು ಪ್ರಕರಣಗಳು ಮಧ್ಯವರ್ತಿಗಳ ಮೂಲಕ ಪಾಸ್‌ಪೋರ್ಟ್ ಕಛೇರಿಗೆ ಬರುತ್ತಿದ್ದು ಆ ಬಗ್ಗೆ ಪರಿಶೀಲಿಸಿ ಅವರ ವಿರುದ್ಧ ಕಾನೂನು ಕ್ರಮಕೈಗೊಳ್ಳುವಂತೆ ಕೋರಿರುತ್ತಾರೆ.

ಆ ಮೇರೆಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ 12–10–2004ರ ಕಾರಣ ಕೇಳುವ ಪತ್ರವನ್ನು ಶ್ರೀಮತಿ ಎನ್. ಭಾಗ್ಯಕುಮಾರಿ, ನೋಟರಿ, ಬೆಂಗಳೂರು (ನಗರ) ಇವರಿಗೆ ಕಳುಹಿಸಿ 15 ದಿನದಲ್ಲಿ ಲಿಖಿತ ಹೇಳಿಕೆ ಸಲ್ಲಿಸುವಂತೆ ಕೋರಲಾಗಿತ್ತು ಮತ್ತು ದಿನಾಂಕ 3–3–2005ರಂದು ಜ್ಞಾಪಿಸಲಾಗಿತ್ತು.

ಸದರಿ ಕಾರಣ ಕೇಳುವ ನೋಟೀಸ್‌ಗೆ ಮೇಲೆ (3)ರಲ್ಲಿ ಓದಲಾದ ದಿನಾಂಕ 17–3–2005 ಪತ್ರದಲ್ಲಿ ಶ್ರೀಮತಿ ಎನ್. ಭಾಗ್ಯಕುಮಾರಿ, ನೋಟರಿ ಇವರು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಅದರಲ್ಲಿ ಪ್ರಮಾಣಕಾರನು ಸಹಿ ಮಾಡದೆ ಇದ್ದಲ್ಲಿ ಅದನ್ನು ಯಾವುದೇ ಸೌಲಭ್ಯಕ್ಕಾಗಿ ಅವರು ಬಳಸಲು ಬರುವುದಿಲ್ಲವಾದ್ದರಿಂದ ಆಪಾದನೆಯನ್ನು ಅಲ್ಲಗಳೆದು ಇದರಲ್ಲಿ ಯಾವುದೇ ತಪ್ಪನ್ನು ತಾವು ಮಾಡಿರುವುದಿಲ್ಲವೆಂದು ಸಮರ್ಥಿಸಿಕೊಂಡಿದ್ದಾರೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರದ ದಿನಾಂಕ 29–6–2005ರ ಪತ್ರದಲ್ಲಿ ರೀಜನಲ್ ಪಾಸ್‌ಪೋರ್ಟ್ ಆಫೀಸರ್ ಇವರ ದಿನಾಂಕ 27–9–2004ರ ಪತ್ರ, ನೋಟರಿಯವರು ದಿನಾಂಕ 10–3–2004ರಂದು ಧೃಢೀಕರಿಸಿರುವ ಅಫೀಡವಿಟ್ ಪ್ರತಿ ಹಾಗೂ ಸದರಿ ನೋಟರಿಯವರು ಸಲ್ಲಿಸಿರುವ ದಿನಾಂಕ 17–3–2005ರ ಲಿಖಿತ ಹೇಳಿಕೆಯನ್ನು ಪ್ರಧಾನ ನಗರ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರಿಗೆ ಕಳುಹಿಸಿ ವಿಷಯದ ಬಗ್ಗೆ ಪರಿಶೀಲಿಸಿ ಅವರ ಅಭಿಪ್ರಾಯವನ್ನು ತಿಳಿಸುವಂತೆ ಕೊರಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ದಿನಾಂಕ 25–11–2006ರ ವಿಚಾರಣಾ ವರದಿಯಲ್ಲಿ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು (ನಗರ) ಇವರು ದೂರುಗಳ ಬಗೆಗಿನ ಆಪಾದನೆಯನ್ನು ನೋಟರಿಯವರು ಅಲ್ಲಗಳೆದಿದ್ದು, ಅದಕ್ಕೆ ಸಂಬಂಧಿಸಿದ ಆಫಿಡವಿಟ್‌ನ ಮೂಲ ಪ್ರತಿ ಇಲ್ಲದೆ ಆಪಾದನೆ ಬಗ್ಗೆ ಆಪಾದಿತರು ತಪ್ಪು ಎಸಗಿರುವರೆಂದು ಪರಿಶೀಲಿಸಿ ವಿಚಾರಣೆ ನಡೆಸಲು ಸಾಧ್ಯವಾಗಿಲ್ಲವೆಂದು ತಿಳಿಸಿದ್ದರ ಮೇರೆಗೆ ಪುನಃ ಮೇಲೆ (6)ರಲ್ಲಿ ಓದಲಾದ ದಿನಾಂಕ 2–5–2007ರ ಸರ್ಕಾರಿ ಪತ್ರದೊಂದಿಗೆ ಮೂಲ ದಾಖಲಾತಿಗಳನ್ನು ಕಳುಹಿಸಿ ವಿಷಯದ ಬಗ್ಗೆ ಪರಿಶೀಲಿಸಿ, ವಿಚಾರಣಾ ವರದಿಯನ್ನು ಅಭಿಪ್ರಾಯದೊಂದಿಗೆ ಕಳುಹಿಸಿಕೊಡುವಂತೆ ಕೋರಲಾಗಿತ್ತು. ಮತ್ತು ದಿನಾಂಕ 28–7–2007, 28–11–2007, 8–1–2008 ಮತ್ತು 21–5–2008ರ ಪತ್ರಗಳಲ್ಲಿ ಜ್ಞಾಪಿಸಲಾಗಿತ್ತು.

ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು (ನಗರ) ಇವರು ಮೇಲೆ (7)ರಲ್ಲಿ ಓದಲಾದ ದಿನಾಂಕ 26–6–2008ರ ಪತ್ರದೊಂದಿಗೆ ಶ್ರೀಮತಿ ಎನ್. ಭಾಗ್ಯಕುಮಾರಿ, ನೋಟರಿ, ಬೆಂಗಳೂರು ಇವರಿಗೆ ಸಂಬಂಧಿಸಿದ ದಿನಾಂಕ 24–6–2008ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ನೋಟರಿಯವರು ಮೂಲ ದಾಖಲೆಗಳನ್ನು ನೋಡಿದ ನಂತರ ತಮ್ಮ ತಪ್ಪನ್ನು ಒಪ್ಪಿಕೊಂಡು ಉದಾರ ತೀರ್ಮಾನ ತೆಗೆದುಕೊಳ್ಳುವಂತೆ ಕೋರಿದ್ದಾರೆ. ಇದರಿಂದ ನೋಟರಿಯವರು ಕರ್ತವ್ಯ ಲೋಪ ಎಸಗಿರುವುದು ಸಾಬೀತಾಗಿದೆ ಎಂದು ತಿಳಿಸಿ ಸೂಕ್ತ ಕ್ರಮ ವಹಿಸಲು ಶಿಫಾರಸ್ಸು ಮಾಡಿದ್ದಾರೆ. ಸದರಿ ವಿಚಾರಣಾ ವರದಿಯನ್ನು ಉಲ್ಲೇಖಿತ (8)ರ ಕಾರಣ ಕೇಳುವ ನೋಟೀಸು ದಿನಾಂಕ 28–7–2008ರಲ್ಲಿ ನೋಟರಿಯವರಿಗೆ ಕಳುಹಿಸಿ ಆಪಾದನೆ ಸಾಬೀತಾಗಿರುವುದರಿಂದ ಅಂತಿಮ ತೀರ್ಮಾನ ಕೈಗೊಳ್ಳುವ ಮುನ್ನ ವರದಿಯ ಬಗ್ಗೆ ಲಿಖಿತ ಹೇಳಿಕೆ ಏನಾದರೂ ಇದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಗಿತ್ತು.

ಸದರಿ ಕಾರಣ ಕೇಳುವ ನೋಟೀಸ್‌ಗೆ ಶ್ರೀಮತಿ ಎನ್. ಭಾಗ್ಯಕುಮಾರಿ, ನೋಟರಿ, ಬೆಂಗಳೂರು (ನಗರ) ಇವರು ಮೇಲೆ (9)ರಲ್ಲಿ ಓದಲಾದ ದಿನಾಂಕ 1–8–2008ರ ಪತ್ರದಲ್ಲಿ ವೈಯಕ್ತಿಕ ಕಾರಣಗಳನ್ನು ನೀಡಿ ಆಗಿರುವ ಕರ್ತವ್ಯ ಲೋಪ ಮನ್ನಿಸಿ ತಿದ್ದಿಕೊಳ್ಳಲು ಮತ್ತೊಂದು ಅವಕಾಶ ನೀಡುವಂತೆ ಕೋರಿದ್ದಾರೆ. ಪಾಸ್ ಪೋರ್ಟ್ ಕಛೇರಿಯ ಪತ್ರದ ಆಪಾದನೆ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ವರದಿ, ನೋಟರಿಯವರ ವಿವರಣೆಯನ್ನು ಪರಿಶೀಲಿಸಿ ಕರ್ತವ್ಯ ಲೋಪ ಸಾಬೀತಾಗಿದ್ದು, ಆ ಹಿನ್ನೆಲೆಯಲ್ಲಿ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲಾ 97 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2008.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀಮತಿ ಎನ್. ಭಾಗ್ಯಕುಮಾರಿ, ನೋಟರಿ, ಬೆಂಗಳೂರು (ನಗರ) ಇವರ ಹೆಸರನ್ನು ನೋಟರಿ ಕಾಯ್ದೆ ಕಲಂ 10(ಸಿ) ಮತ್ತು ನಿಯಮ 13(12)(b)(i) ರೀತ್ಯ ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1533

**ಶಕುಂತಲಾ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಮತಿ ಹೆಚ್.ಆರ್. ರೇಣುಕ, ಜಂಟಿ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಸ್ಥಾನಪನ್ನ ಅವಧಿಯನ್ನು ತೃಪ್ತಿಕರವೆಂದು ಘೋಷಿಸುವ ಕುರಿತು.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ನಂ. ಒಇ 280 ಪಿಪಿಇ 2006, ದಿನಾಂಕ 18–12–2006.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 18–12–2006ರ ಅಧಿಸೂಚನೆಯಲ್ಲಿ ಶ್ರೀಮತಿ ಹೆಚ್.ಆರ್. ರೇಣುಕ, ಸರ್ಕಾರಿ ಅಭಿಯೋಜಕರು/ಅಭಿಯೋಗ ಉಪನಿರ್ದೇಶಕರು ಇವರಿಗೆ ಜಂಟಿ ಅಭಿಯೋಗ ನಿರ್ದೇಶಕರಾಗಿ ಸ್ಥಾನಪನ್ನ ಮೇಲೆ ಮುಂಬಡ್ತಿಯನ್ನು ನೀಡಲಾಗಿತ್ತು.

ಸದರಿಯವರು, ಜಂಟಿ ಅಭಿಯೋಗ ನಿರ್ದೇಶಕರ ಹುದ್ದೆಗೆ ಬಡ್ತಿ ಹೊಂದಿದ ನಂತರ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಕಛೇರಿಯಲ್ಲಿ ಖಾಲಿ ಇದ್ದ ಜಂಟಿ ಅಭಿಯೋಗ ನಿರ್ದೇಶಕರ ಹುದ್ದೆಗೆ ದಿನಾಂಕ 3–1–2007ರಂದು ಪೂರ್ವಾಹ್ನ ವರದಿ ಮಾಡಿಕೊಂಡಿರುತ್ತಾರೆ. ಸದರಿ ಅಧಿಕಾರಿಯವರಿಗೆ ಸಂಬಂಧಿಸಿದಂತೆ 2006–07 (ವಿಶೇಷ ವರದಿ) ಮತ್ತು 2007–08ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯ ಪುನರಾವಲೋಕನ ಮಾಡಿರುವ ಪ್ರಾಧಿಕಾರವು ಮಾಡಿದ ಷರಾ ಪ್ರಕಾರ ಈ ಅಧಿಕಾರಿಯ ವಿರುದ್ಧ ಯಾವುದೇ ಪ್ರತಿಕೂಲ ಷರಾ ಮಾಡದೇ ಇರುವ ಪ್ರಯುಕ್ತ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 19(3)(ಸಿ) ಪ್ರಕಾರ ಸದರಿ ಅಧಿಕಾರಿಯ ಹುದ್ದೆಯ ಸ್ಥಾನಪನ್ನ ಅವಧಿಯನ್ನು ತೃಪ್ತಿಕರವಾಗಿದೆ ಎಂದು ಘೋಷಣೆ ಮಾಡಬೇಕಾಗಿರುತ್ತದೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ. ಒಇ 11 ಪಿಪಿಇ 2008, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀಮತಿ ಹೆಚ್.ಆರ್. ರೇಣುಕ ಇವರು ಮುಂಬಡ್ತಿ ಪಡೆದಿರುವ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಜಂಟಿ ಅಭಿಯೋಗ ನಿರ್ದೇಶಕರ ಹುದ್ದೆಯ ಸ್ಥಾನಪನ್ನ ಅವಧಿಯನ್ನು ದಿನಾಂಕ 2–1–2008ರ ಅಪರಾಹ್ನದಂದು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 19(3)(ಸಿ)ರ ಪ್ರಕಾರ ತೃಪ್ತಿಕರವಾಗಿ ಪೂರ್ಣಗೊಳಿಸಿರುತ್ತಾರೆಂದು ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1261

**ಎಲ್. ಷಣ್ಮುಖ**

ಸರ್ಕಾರದ ಉಪ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)